

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಸದಸ್ಯರ ಹೆಸರು | : | ಶ್ರೀ ಸಿ. ಎಂ ಇಬ್ರಾಹಿಂ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 328 |
| ಉತ್ತರಿಸಬೇಕಾದ ದಿನಾಂಕ | : | 15.12.2021. |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಪಶುಸಂಗೋಪನೆ ಸಚಿವರು. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಪಶುಸಂಗೋಪನೆ ಇಲಾಖೆಯಿಂದ ರೈತರಿಗೆ ಸಿಗುವ ಯೋಜನೆಗಳು ಯಾವುವು; (ವಿವರ ಒದಗಿಸುವುದು) | 2021–22 ನೇ ಸಾಲಿನಲ್ಲಿ ಪಶುಸಂಗೋಪನೆ ಇಲಾಖೆಯ ವತಿಯಿಂದ ರೈತರಿಗೆ ಸಿಗುವ ಯೋಜನೆಗಳ ವಿವರಗಳನ್ನು ಅನುಬಂಧ–1 ರಲ್ಲಿ ನೀಡಲಾಗಿದೆ. |
| ಆ | ಪಶುಭಾಗ್ಯ ಯೋಜನೆಯ ಫಲಾನುಭವಿಗಳ ಆಯ್ಕೆಯ ಮಾನದಂಡವೇನು; | 1. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಮತ್ತು ಇತರೆ ಜನಾಂಗದ ಕೂಲಿ ಕೃಷಿ ಕಾರ್ಮಿಕರು ಭೂರಹಿತರು ಮತ್ತು ಆರ್ಥಿಕವಾಗಿ ಹಿಂದುಳಿದ ಫಲಾನುಭವಿಗಳನ್ನು ಆಯ್ಕೆ ಮಾಡಲಾಗುವುದು.<br>2. ಸರ್ಕಾರದ ನಿಯಮಗಳಂತೆ ಮಹಿಳೆಯರಿಗೆ (ಶೇ.33.3), ವಿಶೇಷ ಚೇತನರಿಗೆ (ಶೇ .3) ಆದ್ಯತೆ ನೀಡಲಾಗುವುದು.<br>3. ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ ಫಲಾನುಭವಿಗಳು RD No. ಇರುವ ಜಾತಿ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಹೊಂದಿರಬೇಕು.<br>4. ಇತರ ಜನಾಂಗದ ಫಲಾನುಭವಿಗಳು ಬಿ.ಪಿ.ಎಲ್ ಕಾರ್ಡ್ ಕಡ್ಡಾಯವಾಗಿ ಹೊಂದಿರಬೇಕು.<br>5. ಅರ್ಜಿದಾರರು FRUITS ತಂತ್ರಾಂಶದಲ್ಲಿ ನೊಂದಾಯಿಸಿರಬೇಕು.<br>6. ವಿಧಾನಸಭಾ ಕ್ಷೇತ್ರದ ಶಾಸಕರ ಅಧ್ಯಕ್ಷತೆಯ ತಾಲ್ಲೂಕು ಮಟ್ಟದ ಆಯ್ಕೆ ಸಮಿತಿ ಸಭೆಯಲ್ಲಿ ಅರ್ಹಫಲಾನುಭವಿಗಳನ್ನು ಆಯ್ಕೆ ಮಾಡಲಾಗುವುದು. |
| ಇ | ಈ ಯೋಜನೆಗೆ ವಾಣಿಜ್ಯ ಬ್ಯಾಂಕುಗಳಲ್ಲಿ ಸಾಲ ನೀಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹೌದಾದಲ್ಲಿ, ಈ ಬಗ್ಗೆ ಮುಂದಿನ ಕ್ರಮವೇನು? | ಬಂದಿರುವುದಿಲ್ಲ. |

ಇ–ಪಸಂಮೀ 306 ಸಲೆವಿ 2021

ಪ್ರಭು ಬಿ. ಚವ್ಹಾಣ್
ಪಶುಸಂಗೋಪನೆ ಸಚಿವರು

## ಅನುಬಂಧ-1

(ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 328 ಕ್ಕೆ ಸಂಬಂಧಿಸಿದಂತೆ)

ಪಶುಪಾಲನಾ ಮತ್ತು ಪಶುವೈದ್ಯಕೀಯಸೇವಾ ಇಲಾಖೆಯಿಂದ ಪಶುಸಂಗೋಪನೆಯ ಅಭಿವೃದ್ಧಿಗಾಗಿ ಈ ಕೆಳಕಂಡ ಯೋಜನೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

| ಕ್ರಸಂ | ಯೋಜನೆ | ವಿವರ |
|---|---|---|
| 1 | ಅನುಸೂಚಿತ ಜಾತಿಗಳ ಉಪಯೋಜನೆ ಮತ್ತು ಬುಡಕಟ್ಟು ಉಪಯೋಜನೆ ಕಾಯ್ದೆ 2013ರ ಅನ್ವಯ ಬಳಕೆಯಾಗದ ಮೊತ್ತ | • ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ಪಂಗಡದ ಫಲಾನುಭವಿಗಳಿಗೆ ಹಾಲು ಕರೆಯುವ ಯಂತ್ರ ಮತ್ತು ಹಸುಗಳ ನೆಲ ಹಾಸು ಇವುಗಳನ್ನು ಶೇ.90 ರ ಸಹಾಯಧನದೊಂದಿಗೆ ವಿತರಿಸಲಾಗುವುದು. |
| 2 | ಕರ್ನಾಟಕ ಕುರಿ ಮತ್ತು ಕುರಿ ಉಣ್ಣೆ ಅಭಿವೃದ್ದಿ ನಿಗಮ ನಿಯಮಿತ: | • ನಿಗಮದಲ್ಲಿ ನೊಂದಣಿಯಾಗಿರುವ ಕುರಿ ಮತ್ತು ಉಣ್ಣೆ ಉತ್ಪಾದಕರ ಸಹಕಾರಸಂಘಗಳ ಪರಿಶಿಷ್ಟ ಪಂಗಡದ ಸದಸ್ಯರುಗಳಿಗೆ 6+1 ಕುರಿ/ಮೇಕೆ ಘಟಕ ವಿತರಿಸುವುದು,<br>• ವಲಸೆ ಕುರಿಗಾಗರಿಗೆ ಸಂಚಾರಿ ಟೆಂಟ್, ಸೋಲಾರ್ ಟಾರ್ಚ್, ರಬರ್ ಪ್ಲೋರ್ ಮ್ಯಾಟ್ ಮತ್ತು ರೇನ್ ಕೋಟ್ ಸೇರಿದಂತೆ ಪರಿಕರಗಳ ಕಿಟ್‌ಗಳ ವಿತರಣೆ ಮಾಡಲಾಗುವುದು.<br>• ಕುರಿಗಾರರಿಗೆ ವೈಜ್ಞಾನಿಕ ಕುರಿ ಸಾಕಾಣಿಕೆಯಲ್ಲಿ ತರಬೇತಿ ನೀಡಲಾಗುವುದು. |
| 3 | ರಾಷ್ಟ್ರೀಯ ಜಾನುವಾರು ಮಿಷನ್ (ಕೇಂದ್ರ ಪುರಸ್ಕೃತ ಯೋಜನೆ): | • ಜಾನುವಾರು ವಿಮಾ ಯೋಜನೆ, |
| 4 | ಮುಖ್ಯ ಮಂತ್ರಿಗಳ ಅಮೃತ ಜೀವನ ಯೋಜನೆ | • ಆರ್ ಕೆವಿವೈ, ಅನುದಾನದಲ್ಲಿ ಕೃಷಿಕಾರ್ಮಿಕರು, ವಿಧವೆಯರು, ದೇವದಾಸಿಯರು, ನಿರ್ಗತಿಕ ಮಹಿಳೆಯರಿಗೆ ಸ್ವಾವಲಂಬಿ ಜೀವನವನ್ನು ನಡೆಸಲು ಹೈನು ಘಟಕ, ಕುರಿ/ಮೇಕೆ ಘಟಕ ಮತ್ತು ಹಂದಿಘಟಕ ಸ್ಥಾಪನೆಮಾಡಲು ಸಹಾಯಧನ ನೀಡಲಾಗುತ್ತಿದೆ. |
| 5 | ಅಮೃತಸಿರಿ | • ಇಲಾಖೆಯ ಎಲ್ಲಾ ಜಾನುವಾರು ಕ್ಷೇತ್ರಗಳಲ್ಲಿ ಹುಟ್ಟುವ ಹೆಚ್ಚುವರಿ ಹೆಣ್ಣುಕರುಗಳನ್ನು/ ಕಡಸುಗಳನ್ನು/ ಹಸುಗಳನ್ನು ಪುಸ್ತಕ ಬೆಲೆಯ ಶೇಕಡ 25 ರಂತೆ ಜಿಲ್ಲೆಯ ರೈತರಿಗೆ, ದೇವದಾಸಿಯರಿಗೆ, ವಿಧವೆಯರಿಗೆ, ಶವಸಂಸ್ಕಾರ ಕಾರ್ಮಿಕರಿಗೆ ವಿತರಣೆ ಮಾಡಲಾಗುವುದು. |

...2

| | | |
|---|---|---|
| 6 | ಹಾಲು ಉತ್ಪಾದಕರಿಗೆ ಉತ್ತೇಜನ: | • ಹಾಲು ಉತ್ಪಾದನೆಗೆ ಉತ್ತೇಜನ ನೀಡಲು ಕರ್ನಾಟಕ ಹಾಲು ಮಹಾಮಂಡಳಿಗೆ ಹಾಲು ಸರಬರಾಜು ಮಾಡುವ ಸದಸ್ಯರಿಗೆ ಪ್ರತಿಲೀಟರ್‌ಗೆ ರೂ.5/– ರಂತೆ ಪ್ರೋತ್ಸಾಹಧನ ನೀಡಲಾಗುವುದು. |
| 7 | ಆರ್. ಐ.ಡಿ.ಎಫ್. ಯೋಜನೆ | ಮೂಲಭೂತ ಸೌಲಭ್ಯಗಳನ್ನು ಒದಗಿಸಲು ಈ ಯೋಜನೆಯಡಿ ನಬಾರ್ಡ ನೆರವನೊಂದಿಗೆ ಗ್ರಾಮೀಣ ಪ್ರದೇಶದಲ್ಲಿರುವ ಪಶುವೈದ್ಯ ಸಂಸ್ಥೆಗಳ ನೂತನ ಕಟ್ಟಡ ನಿರ್ಮಾಣ ಕಾರ್ಯವನ್ನು ಹಮ್ಮಿಕೊಳ್ಳಲಾಗಿದೆ. ಆರ್. ಐ.ಡಿ.ಎಫ್. ಟ್ರಾಂಚ್ 20–25 ರವರೆಗೆ 906 ಕಟ್ಟಡಗಳನ್ನು ರೂ.361.16 ಕೋಟಿ ವೆಚ್ಚದಲ್ಲಿ ನಿರ್ಮಾಣ ಮಾಡುತ್ತಿದ್ದು, ಇದುವರೆವಿಗೆ 626 ಕಟ್ಟಡಗಳು ಪೂರ್ಣಗೊಂಡಿರುತ್ತವೆ. |
| 8 | ರಾಷ್ಟ್ರೀಯ ಕೃತಕ ಗರ್ಭಧಾರಣೆ ಕಾರ್ಯಕ್ರಮ (NAIP) | ಶೇ.50 ಕ್ಕಿಂತ ಕೃತಕ ಗರ್ಭಧಾರಣೆ ಕಡಿಮೆ ಇರುವ ಜಿಲ್ಲೆಗಳಲ್ಲಿ ಈ ಕಾರ್ಯಕ್ರಮವನ್ನು ಅನುಷ್ಠಾನ ಮಾಡಲಾಗುತ್ತಿದ್ದು, ರೈತರ ಮನೆ ಬಾಗಿಲಿಗೆ ಕೃತಕ ಗರ್ಭಧಾರಣಾ ಕಾರ್ಯಕರ್ತರ ಮುಖಾಂತರ ಉಚಿತ ಕೃತಕ ಗರ್ಭಧಾರಣೆ ಸೇವೆಯನ್ನು ಒದಗಿಸಲಾಗುತ್ತಿದೆ. ಪ್ರಸ್ತುತ ರಾಜ್ಯದ 17 ಜಿಲ್ಲೆಗಳಲ್ಲಿ ಈ ಕಾರ್ಯಕ್ರಮ ಜಾರಿಯಲ್ಲಿರುತ್ತದೆ. |



